ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಪೊಲೀಸ್ ಠಾಣೆಗಳಲ್ಲಿನ ಕಾರ್ಯವೈಖರಿ ಬಗ್ಗೆ

ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

712 (1012) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಪೊಲೀಸ್ ಠಾಣೆಗಳಲ್ಲಿ ಸಾರ್ವಜನಿಕರು ದೂರು ನೀಡಿದ್ದಲ್ಲಿ ಆ ದೂರಿನ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ಎಂಬ ಬಗ್ಗೆ ಮಾಹಿತಿಯನ್ನು ಸಾರ್ವಜನಿಕರಿಗೆ ನೀಡುವ ಪದ್ಧತಿ ಇದೆಯೇ; ಇದ್ದಲ್ಲಿ ಯಾವ ರೀತಿ ನೀಡಲಾಗುತ್ತದೆ ;

(ಆ) ಆಯಾ ಬಡಾವಣೆಗಳ ಜನರ ಜೊತೆ ಕುಂದುಕೊರತೆಗಳನ್ನು, ದೂರುಗಳನ್ನು ಕೇಳಿ ಸಲಹೆ ಸೂಚನೆಗಳನ್ನು ಪಡೆಯಲು ಜನ ಸಂಪರ್ಕ ಸಭೆಗಳನ್ನು ಹಿರಿಯ ಅಧಿಕಾರಿಗಳು ಏರ್ಪಡಿಸುವ ಪದ್ಧತಿ ಇದೆಯೇ ;

(ಇ) ಬೆಂಗಳೂರು ನಗರದ ಯಾವ ಯಾವ ಪೊಲೀಸ್ ಠಾಣೆಗಳಲ್ಲಿ ಎಷ್ಟೆಷ್ಟು ಸಭೆಗಳನ್ನು ನಡೆಸಲಾಗಿದೆ ; (ಸಭೆ ನಡೆಸಿದ ಸ್ಥಳ ಮತ್ತು ದಿನಾಂಕದ ವಿವರ ನೀಡುವುದು)

(ಈ) ಈ ಜನಸಂಪರ್ಕ ಸಭೆಗಳನ್ನು ಯಾವ ದರ್ಜೆಯ ಪೊಲೀಸ್ ಅಧಿಕಾರಿಗಳು ನಡೆಸುತ್ತಾರೆ ; ಅವರು ಸ್ಥಳದಲ್ಲೇ ಪರಿಹಾರವನ್ನು ನೀಡುವ ಸಾಮರ್ಥ್ಯ ಹೊಂದಿರುವರೆ ?